ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 16ನೇ ಮಾರ್ಚ್, 2020

ಹೇಮಾವತಿ ಸಹಕಾರ ಸಕ್ಕರೆ ಕಾರ್ಖಾನೆಯ ಆಧುನೀಕರಣದ ಬಗ್ಗೆ

ಶ್ರೀ ಎಂ.ಎ. ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

954 (1040) ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆ ಶ್ರೀನಿವಾಸಪುರ, ಚನ್ನರಾಯಪಟ್ಟಣ ತಾಲ್ಲೂಕು ಇದನ್ನು ಆಧುನೀಕರಿಸಿ ಕಬ್ಬು ಅರೆಯುವ ಸಾಮರ್ಥ್ಯವನ್ನು ಹೆಚ್ಚಿಸಲು ಶ್ರೀ ಚಾಮುಮಡೇಶ್ವರಿ ಶುಗರ್ಸ್ ಲಿಮಿಟೆಡ್, ಬೆಂಗಳೂರು ಇವರೊಂದಿಗೆ ಒಪ್ಪಂದವಾಗಿದ್ದು, ಈ ಒಪ್ಪಂದದಂತೆ ಹೇಮಾವತಿ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು ಆಧುನೀಕರಿಸಲಾಗಿದೆಯೇ;

(ಆ) ಹಾಗಿದ್ದಲ್ಲಿ, ಯಾವ ವರ್ಷದಲ್ಲಿ ಆಧುನೀಕರಿಸಲಾಗಿದೆ ಮತ್ತು ಆಧುನೀಕರಿಸಿರುವ ಕಾಮಗಾರಿಗಳ ವಿವರ ನೀಡುವುದು; ಆಧುನೀಕರಣದ ನಂತರ ಕಬ್ಬು ಅರೆಯುವ ಸಾಮರ್ಥ್ಯ ಎಷ್ಟು ಹೆಚ್ಚಳವಾಗಿದೆ; (ವಿವರ ನೀಡುವುದು)

(ಇ) ಈ ಭಾಗದ ರೈತರು ಪ್ರತಿ ವರ್ಷ ಬೆಳೆಯುತ್ತಿರುವ ಕಬ್ಬಿನ ಅಂದಾಜು ಪ್ರಮಾಣವೆಷ್ಟು; ಈ ಕಾರ್ಖಾನೆಯು ರೈತರಿಂದ ಪ್ರತಿ ವರ್ಷ ಎಷ್ಟು ಟನ್ ಕಬ್ಬನ್ನು ಖರೀದಿ ಮಾಡುತ್ತಿದೆ; ಖರೀದಿಸುವ ಪ್ರತಿ ಟನ್‌ಗೆ ನೀಡುತ್ತಿರುವ ಬೆಲೆ ಎಷ್ಟು; (ಕಳೆದ 2 ವರ್ಷಗಳ ಮಾಹಿತಿ ನೀಡುವುದು)

(ಈ) ಪ್ರತಿ ಟನ್ ಕಬ್ಬಿಗೆ ಸರ್ಕಾರವು ನಿಗದಿಪಡಿಸಿರುವ ಬೆಲೆ ಎಷ್ಟು; ಸರ್ಕಾರವು ನಿಗದಿಪಡಿಸಿರುವ ಬೆಲೆಗೆ ಸಕ್ಕರೆ ಕಾರ್ಖಾನೆಗಳು ಕಬ್ಬನ್ನು ಖರೀದಿಸುತ್ತಿವೆಯೇ; ರೈತರಿಂದ ಕಬ್ಬನ್ನು ಖರೀದಿಸಿದ ತಕ್ಷಣ ಸಕ್ಕರೆ ಕಾರ್ಖಾನೆಗಳು ರೈತರಿಗೆ ಹಣ ಪಾವತಿ ಮಾಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು)